ಭಾಗ II

**ಭಾಷೆ ಮತ್ತು ಜ್ಞಾನದ ಅಭಿವೃದ್ಧಿ**

ಭಾಷೆಯ ಮಹತ್ವ

ರೋಹಿತ್ ಧನ್‌ಕರ್ ಅವರು ತಮ್ಮ ಈ ಲೇಖನದಲ್ಲಿ ಮನುಷ್ಯ, ಆತನ ಕಲಿಯುವಿಕೆ, ಆತನ ಪರಿಕಲ್ಪನೆಗಳ ಕ್ರಮಬದ್ಧವಾದ ಪ್ರತಿಪಾದನೆ ಮತ್ತು ಭಾಷೆಯ ನಡುವಿನ ಸಂಬಂಧವನ್ನು ವಿವರಿಸಿದ್ದಾರೆ. ಅವರ ಪ್ರಕಾರ, ಭಾಷೆ ಎಂಬುದು ಕೇವಲ ಸಂವಹನ ಮತ್ತು ಶಿಕ್ಷಣದ ಮಾಧ್ಯಮ ಅಥವಾ ಸಾಧನ ಮಾತ್ರವಲ್ಲ, ಬದಲಿಗೆ ಅದು ಮಾನವನ ಆಲೋಚನೆ ಮತ್ತು ನಿರ್ಧಾರಗಳನ್ನು ತೆಗೆದುಕೊಳ್ಳುವುದಕ್ಕೂ ಆಧಾರವಾಗಿದೆ. ಭಾಷೆಯು ಆತನ ಸ್ವಂತ ಅನುಭವಕ್ಕೆ ಅರ್ಥವನ್ನು ನೀಡುತ್ತದೆ. ಅಸಲಿಗೆ, ಒಂದು ವೇಳೆ ಲೇಖಕರ ಮಾತುಗಳನ್ನು ಒಂದು ತಾರ್ಕಿಕ ತೀರ್ಮಾನಕ್ಕೆ ತೆಗೆದುಕೊಂಡು ಹೋಗುವುದಾದರೆ, ಅವರ ಪ್ರಕಾರ ಭಾಷೆಯು ಮಾನವನ ಭಾವನೆಗಳಿಗೂ ಅರ್ಥವನ್ನು ಕೊಡುತ್ತದೆ. ಮುಂದೆ ಲೇಖಕರು ಭಾಷೆಯು ಕಾರ್ಯಾಚರಿಸುವ ರೀತಿ ಮತ್ತು ಅದರ ರಚನೆಯ ಬಗ್ಗೆ ಕೆಲವು ವಿಷಯಗಳನ್ನು ಹೇಳುತ್ತಾರೆ. ಜೊತೆಗೆ ಮಾನವನ ಭಾಷಾ ಜ್ಞಾನಕ್ಕಾಗಿ ಧ್ವನಿ ಮತ್ತು ದೃಶ್ಯ ಸಂಕೇತಗಳ ನಡುವೆ ಸ್ವಚ್ಛಂದವಾದ, ಆದರೆ ಖಚಿತವಾದ ಮತ್ತು ಸಾರ್ವತ್ರಿಕ ಸಂಬಂಧವು ಕಂಡುಬರುವುದಾಗಿ ತಿಳಿಸುತ್ತಾರೆ. ಹೀಗೆ ನಿರ್ಮಿಸಿದ ವ್ಯವಸ್ಥೆಯು ಅರ್ಥವನ್ನು ಸೃಷ್ಟಿಸುವ ಅಪಾರ ಸಾಮರ್ಥ್ಯವನ್ನು ಹೊಂದಿದೆ.

ಪ್ರಾಥಮಿಕ ಶಿಕ್ಷಣದಲ್ಲಿ ಭಾಷೆಯ ಪ್ರಧಾನವಾದ ಪ್ರಾಮುಖ್ಯತೆ ಮತ್ತು ಅದರ ಮೇಲೆ ಮಗುವಿನ ಹಕ್ಕು, ಇವೆರಡೂ ವ್ಯಾಪಕವಾಗಿ ಸ್ವೀಕೃತವಾಗಿರುವಂಥದ್ದಾಗಿದೆ. ಈ ವ್ಯಾಪಕವಾದ ಸಮ್ಮತಿಯ ಕಾರಣಗಳನ್ನು ಅರ್ಥಮಾಡಿಕೊಳ್ಳುವುದು ತುಂಬ ಕಷ್ಟದ ಕೆಲಸವೇನಲ್ಲ. ಮಕ್ಕಳಿಗೆ ಮಾತ್ರವಲ್ಲ, ಮನುಷ್ಯರೆಲ್ಲರ ಸಂವಹನಕ್ಕೂ ಭಾಷೆ ಅತ್ಯವಶ್ಯಕವಾಗಿರುವಂಥದ್ದು ಎಂಬುದು ಸ್ಪಷ್ಟವಾಗಿದೆ. ಇದರ ಆಧಾರದಲ್ಲಿ ಭಾಷೆಯು ಗಣಿತ, ವಿಜ್ಞಾನ ಅಥವಾ ಇತರೆ ವಿಷಯಗಳನ್ನು ಅರ್ಥಮಾಡಿಕೊಳ್ಳಲು ಕೂಡ ಅ್ಯಕವಾಗಿದೆ ಎಂಬುದಾಗಿ ಹೇಳಬಹುದೇ? ಖಂಡಿತವಾಗಿಯೂ ಹೇಳಬಹುದು. ಏಕೆಂದರೆ, ಮಗುವಿಗೆ ಶಿಕ್ಷಣದ ಎಲ್ಲಾ ಅಂಶಗಳನ್ನು ಭಾಷೆಯ ಮೂಲಕ ಮಾತ್ರವೇ ಸಂಯೋಜಿಸಲು ಸಾಧ್ಯವಾಗುತ್ತದೆ. ವಾಸ್ತವವಾಗಿ, ಮಕ್ಕಳು ಭಾಷೆಯ ಮೂಲಕ ಮತ್ತು ಭಾಷೆಯ ಮುಖಾಂತರ ಯೋಚಿಸುತ್ತಾರೆ, ನಿರ್ಧಾರಗಳನ್ನು ತೆಗೆದುಕೊಳ್ಳುತ್ತಾರೆ ಹಾಗೂ ಕೆಲಸ ಮಾಡುತ್ತಾರೆ. ಸಮಾಜದ ಅಂಗವಾಗಿರುವುದರಿಂದ ಭಾಷೆಯು ಮಕ್ಕಳ (ಮತ್ತು ಉಳಿದೆಲ್ಲರ) ಅಸ್ತಿತ್ವದ ಕೇಂದ್ರವಾಗಿದೆ.

ಒಂದು ವೇಳೆ ಮಕ್ಕಳ ಶಿಕ್ಷಣ ಮತ್ತು ಅವರ ಬೆಳವಣಿಗೆಯಲ್ಲಿ ಭಾಷೆಯ ಪ್ರಾಧಾನ್ಯತೆಯನ್ನು ನಾವು ಅರ್ಥ ಮಾಡಿಕೊಳ್ಳಬೇಕಿಂದಿದ್ದರೆ, ಮೇಲೆ ವಿವರಿಸಿರುವ ದೃಷ್ಟಿಕೋನವು ಸ್ಪಷ್ಟವಾಗಿ ಉಪಯುಕ್ತವಾಗಿರುವುದಷ್ಟೇ ಅಲ್ಲದೆ ಅತ್ಯಂತ ಅನಿವಾರ್ಯವೂ ಆಗುತ್ತದೆ. ಇದರ ಹೊರತಾಗಿಯೂ, ಇದು ಈಗಲೂ ಒಂದು ಸೀಮಿತ ದೃಷ್ಟಿಕೋನವಾಗಿದೆ. ಇದು ಭಾಷೆಯನ್ನು ಒಂದು 'ಸಾಧನ'ದ (tool) ಹಾಗೆ, ಗಣಿತವನ್ನು ಅರ್ಥೈಸುವ ಸಾಧನ ಅಥವಾ ನಿರ್ಣಯಿಸುವ ಸಾಧನದಂತೆ ನೋಡುತ್ತದೆ ಎನ್ನುವುದೇ ಈ ದೃಷ್ಟಿಕೋನದ ಮಿತಿಯಾಗಿದೆ. ಭಾಷೆಯು ನಿಸ್ಸಂಶಯವಾಗಿಯೂ ಒಂದು ಸಾಧನವಾಗಿದೆ, ಆದರೆ ಅದಕ್ಕಿಂತ 'ತುಂಬ ಹೆಚ್ಚು' ಕೂಡ ಆಗಿದೆ. ಜೊತೆಗೆ, ಬಹುಶಃ ಮಕ್ಕಳಿಗೆ ಶಿಕ್ಷಣದಲ್ಲಿ ಹಾಗೂ ಮಾನವನಿಗೆ ಜೀವನದಲ್ಲಿ ಭಾಷೆಯ ಪ್ರಾಧಾನ್ಯತೆಯನ್ನು ನಿರ್ಣಯಿಸಲು ಇದು 'ತುಂಬ ಹೆಚ್ಚು' ವಿಶೇಷವಾಗಿ ಮುಖ್ಯವಾಗಿದೆ.

ಮನುಷ್ಯನು ತನ್ನ ಸುತ್ತಮುತ್ತಲಿನ ಜಗತ್ತನ್ನು ನೋಡುವುದು ಮತ್ತು ಅನುಭವಿಸುವುದಷ್ಟೇ ಅಲ್ಲ, ತಾನು ತನ್ನ ಸುತ್ತಮುತ್ತ ನೋಡುವ ಮತ್ತು ಅನುಭವಿಸುವ ವಿಷಯಗಳಿಗೆ ಅರ್ಥವನ್ನೂ ಕೊಡುತ್ತಾನೆ. ಅಂದರೆ, ಮುಂಗಾರು ಮಳೆಯ ಸಂದರ್ಭದಲ್ಲಿ ಆಕಾಶದಲ್ಲಿ ಕಾಣಿಸುವ ದಟ್ಟವಾದ

ಕಪ್ಪನೆಯ ಮೋಡಗಳನ್ನು ನೋಡಿದಾಗ ನನ್ನ ಮೇಲೆ ಉಂಟಾಗುವ ಪ್ರಭಾವವು ಕೇವಲ ಒಂದು ಆಕೃತಿಯನ್ನು ನೋಡಿದಾಗ ಉಂಟಾಗುವ ಪ್ರಭಾವವಷ್ಟೇ ಅಲ್ಲ. ಅದೊಂದು ಅಸ್ಪಷ್ಟವಾದ ಭಾವನೆಯಾಗಿರುತ್ತದೆ. ಅದು ಆ ಕಪ್ಪು ಮೋಡಗಳನ್ನು ಸುರಿಯುವ ಮಳೆಗೆ ಜೋಡಿಸುವುದಲ್ಲದೆ, ಬಳಿಕ ಅದರಲ್ಲಿ ನಲಿದಾಡುವ ನವಿಲು ಮತ್ತು ನಾನು ಒದ್ದೆ ಬಟ್ಟೆಯಿಂದ ಅನುಭವಿಸುವ ಸಂಕಷ್ಟ ಎಲ್ಲವನ್ನೂ ಒಳಗೊಂಡಿರುತ್ತದೆ. ಒಂದು ವೇಳೆ ನಾನು ಈ ಸಂಬಂಧ ಹಾಗೂ ಸಂಲಗ್ನತೆಯನ್ನು ಮಾಡಲು ಸಾಧ್ಯವಾಗದಿದ್ದರೆ, ಕಪ್ಪು ಮೋಡದಿಂದ ನನಗೆ ಏನನ್ನೂ ಅರ್ಥೈಸಲು ಸಾಧ್ಯವಾಗುವುದಿಲ್ಲ. ಹಾಗೂ ನನ್ನ ಮೇಲೆ ಅದರ ಯಾವುದೇ ಪರಿಣಾಮವನ್ನೂ ಉಂಟಾಗುವುದಿಲ್ಲ. ಬದಲಿಗೆ, ಅದೊಂದು ಕೇವಲ ನನ್ನ ಅನುಭವಕ್ಕೆ ಬಂದ ಆಕೃತಿಯಾಗಿರುತ್ತದೆಯಷ್ಟೇ.

ಈ 'ಜೋಡಣೆಯ ಪ್ರಕ್ರಿಯೆ'ಯೇ ಈ ಜಗತ್ತಿನ ಎಲ್ಲದಕ್ಕೂ ಅರ್ಥವನ್ನು ಕೊಡುವಂಥದ್ದು. ಅರ್ಥವನ್ನು ನೀಡುವ ಈ ಪ್ರಕ್ರಿಯೆಯೇ ವಸ್ತುಗಳ ಸ್ಥಿತಿಯನ್ನು ನಮ್ಮ ಮನಸ್ಸಿನಲ್ಲಿ ಕೇವಲ 'ಇರುವಿಕೆ'ಯಿಂದ 'ಅರ್ಥಪೂರ್ಣವಾಗಿರುವಿಕೆ'ಗೆ ಬದಲಿಸುತ್ತದೆ. ಪರಿಕಲ್ಪನೆಗಳ ಮೂಲಕ ನಾವು ಈ ಅರ್ಥವನ್ನು ಕಲ್ಪಿಸುತ್ತೇವೆ. ಈ ಪರಿಕಲ್ಪನೆಗಳನ್ನು ಅಭಿವೃದ್ಧಿಪಡಿಸಲು ಮತ್ತು ಅದನ್ನು ಸ್ಪಷ್ಟವಾಗಿ ನಿರೂಪಿಸಲು, ನಾವು ನಮ್ಮ ಮನಸ್ಸಿನಲ್ಲಿ ಅನೇಕ ಪ್ರತೀಕಗಳನ್ನು ರೂಪಿಸಿಕೊಳ್ಳುತ್ತೇವೆ. ಜೊತೆಗೆ ಈ ಪ್ರತೀಕಗಳು ಹಾಗೂ ಪರಿಕಲ್ಪನೆಗಳ ನಡುವೆ ಪರಸ್ಪರ ಸಂಬಂಧವನ್ನೂ ಹಾಗೂ ಬಾಂಧವ್ಯವನ್ನು ಕಲ್ಪಿಸಿಕೊಳ್ಳುತ್ತೇವೆ. ಈ ಪ್ರತೀಕಗಳೊಂದಿಗಿನ ಮಾನಸಿಕ ಚಟುವಟಿಕೆಯೇ (ಪ್ರತೀಕಗಳ ಕೊಡುಕೊಳ್ಳುವಿಕೆ ಅಥವಾ Symbolic Transaction) ಪರಿಕಲ್ಪನೆಯ ರಚನೆಯ ಪ್ರಕ್ರಿಯೆಯೂ ಆಗಿರುತ್ತದೆ.

ಭಾಷೆಯು ಈ ಪ್ರತೀಕಗಳ ಕೊಡುಕೊಳ್ಳುವಿಕೆಯ ತಳಹದಿವಾಗಿದೆ ಮತ್ತು ವಾಸ್ತವವಾಗಿ ಈ ಇಡೀ ಪ್ರಕ್ರಿಯೆಯ ಅದೃಶ್ಯ ಮತ್ತು ಅವಶ್ಯಕ ಹಾಗೂ ಅವಿಭಾಜ್ಯ ಅಂಗವಾಗಿದೆ. ಈ ಪ್ರಕ್ರಿಯೆಯು ವ್ಯಕ್ತಿಯ 'ಗ್ರಹಿಕೆಯ ಚೌಕಟ್ಟ'ನ್ನೂ ರೂಪಿಸುತ್ತದೆ, ಇಲ್ಲವೇ ಅದರ ನಿರ್ಮಾಣದೆಡೆಗೆ ನಮ್ಮನ್ನು ಒಯ್ಯುತ್ತದೆ.

ಪರಿಕಲ್ಪನೆಗಳಿಗೆ 'ಹೆಸರು' ನೀಡದೆ ಇದ್ಯಾವುದೂ ಸಾಧ್ಯವಾಗದು. ಪರಿಕಲ್ಪನೆಗಳಿಗೆ ನೀಡಲಾದ ಈ ಹೆಸರುಗಳನ್ನೇ ನಾವು ಭಾಷೆಯಲ್ಲಿ ಪದಗಳಾಗಿ ತಿಳಿದುಕೊಂಡಿರುತ್ತೇವೆ. ಈ ಪರಿಕಲ್ಪನೆಯ ಚೌಕಟ್ಟಿನ ವಿಕಾಸ ಮತ್ತು ನಿರ್ಮಾಣವನ್ನೇ ನಾವು ಜ್ಞಾನದ ಬೆಳವಣಿಗೆ ಮತ್ತು ಜ್ಞಾನವನ್ನು ಪಡೆಯುವುದು ಎಂದು ಕರೆಯುತ್ತೇವೆ. ಅಂದರೆ, ಭಾಷೆ ಮತ್ತು ಜ್ಞಾನವು ಪರಸ್ಪರ ಅವಲಂಬಿತವಾಗಿರುವಂಥದ್ದು ಹಾಗೂ ಒಂದಿಲ್ಲದೆ ಇನ್ನೊಂದರ ಅಸ್ತಿತ್ವವು ಇರಲು ಸಾಧ್ಯವಿಲ್ಲ.

ಹೀಗಾಗಿ, ಭಾಷೆ ಕೇವಲ ಒಂದು ’ಸಾಧನ’ವಷ್ಟೇ ಅಲ್ಲ. ಇದು ಜ್ಞಾನದ ಅನಿವಾರ್ಯತೆಯೂ ಆಗಿದೆ ಹಾಗೂ ಬೇರ್ಪಡಿಸಲಾಗದ ಭಾಗವೂ ಆಗಿದೆ. ಇದು ಮನುಷ್ಯನ ಮನಸ್ಸು (Mind) ಮತ್ತು ಸ್ವಯಂ ಪ್ರಜ್ಞೆಯ ಸಮಷ್ಟೀಕರಣವಾಗಿದೆ. ಏಕೆಂದರೆ, ಮನುಷ್ಯನ ಮನಸ್ಸು ಜ್ಞಾನದ ಸಮಗ್ರತೆಯಲ್ಲದೆ ಬೇರೇನೂ ಅಲ್ಲ! ಇದು ಜ್ಞಾನದ ಬೆಳವಣಿಗೆಯೊಂದಿಗೆ ವಿಕಸಿತವಾಗುತ್ತದೆ ಮತ್ತು ಜ್ಞಾನದ ಬೆಳವಣಿಗೆಗೆ ಅಡ್ಡಿಯಾದಾಗ ಅದರ ವಿಕಾಸವೂ ಕುಂಠಿತವಾಗುತ್ತದೆ. ಪ್ರಾಥಮಿಕ ಶಿಕ್ಷಣಕ್ಕೆ ಈ ನಿರ್ಣಯವು ಬಹಳ ಮಹತ್ವಪೂರ್ಣವಾಗಿದೆ.

ಭಾಷೆ ಮತ್ತು ಜ್ಞಾನದ ಬೆಳವಣಿಗೆಯ ಒಂದು ನಿರ್ದಿಷ್ಟ ಹಂತದ ನಂತರ, ಅವೆರಡಕ್ಕೂ ಒಂದು ಮೂಲಭೂತವಾದ ಚೌಕಟ್ಟು ಲಭ್ಯವಾಗಬೇಕಾಗುತ್ತದೆ. ಏಕೆಂದರೆ, ಭಾಷೆಯು ಜೊತೆ ಜೊತೆಗೆ ವಿಕಾಸವಾಗದಿದ್ದರೂ ಸಹ ಜ್ಞಾನವು ಬೆಳವಣಿಗೆಯಾಗುತ್ತಿರಬೇಕು ಹಾಗೂ ಜ್ಞಾನದ ಬೆಳವಣಿಗೆಯು ಅಷ್ಟಾಗಿ ಇಲ್ಲದಿದ್ದರೂ ಭಾಷೆಯ ವಿಕಾಸವಾಗುತ್ತಲೇ ಇರಬೇಕು. ಆದರೆ ಪ್ರಾಥಮಿಕ ಶಿಕ್ಷಣದ ಹಂತದಲ್ಲಿ ಇಂತಹ ’ವಿಭಜನೆ’ ಅಸಾಧ್ಯ ಎಂಬುದು ಕೂಡ ಅಷ್ಟೇ ಸತ್ಯ. ಪ್ರಾಥಮಿಕ ಶಿಕ್ಷಣದ ಹಂತದಲ್ಲಿ ಭಾಷೆ ಮತ್ತು ಜ್ಞಾನ, ಇವೆರಡರ ಬೆಳವಣಿಗೆಯು ಮಗುವಿನ ಮಾನಸಿಕ ಬೆಳವಣಿಗೆಯೊಂದಿಗೆ ಪರಸ್ಪರ ಬೇರ್ಪಡಿಸಲಾಗದ ಪೂರಕ ಅಂಶಗಳಾಗಿವೆ.

ನಾವೀಗ ಭಾಷೆಯ ಬಗೆಗಿನ ಕೆಲವೊಂದು ಅಂಶಗಳನ್ನು ಕೂಡ ನೋಡೋಣ.

ಆಡುಮಾತಿನ ಭಾಷೆಯ ಮೂಲಭೂತ ಘಟಕವೆಂದರೆ ಪದ. ಈ ಪದಗಳು ಧ್ವನಿಗಳ ಸಂಯೋಜನೆಯಾಗಿದೆ. ಒಂದು ವೇಳೆ ಈ ಧ್ವನಿಗಳ ಸಂಯೋಜನೆಯು ಪರಿಕಲ್ಪನೆಯೊಂದಿಗೆ ಜೋಡಣೆ ಆಗಿರದಿದ್ದರೆ, ಅದು ಧ್ವನಿಗಳ ಕೇವಲ ಅರ್ಥಹೀನ ಸಂಯೋಜನೆಯಾಗಿರುತ್ತದೆ ಮತ್ತು ಪದವಾಗಿ ರೂಪುಗೊಳ್ಳುವುದಿಲ್ಲ. ಯಾವುದೇ ನಿರ್ದಿಷ್ಟ ಪದ ಸಂಯೋಜನೆಯನ್ನು ಯಾವುದೇ ನಿರ್ದಿಷ್ಟ ಪರಿಕಲ್ಪನೆಯೊಂದಿಗೆ ಜೋಡಿಸಲು ಯಾವುದೇ ತಾರ್ಕಿಕ ಆಧಾರವಾಗಲಿ, ನಿಯಮಗಳಾಗಲಿ ಇರುವುದಿಲ್ಲ. ಭಾಷೆಯನ್ನು ಬಳಸುವವರಿಗೆ, ಈ ಜೋಡಣೆಯು ಅನಿಯಂತ್ರಿತವಾಗಿದೆ, ಅರ್ಥಾತ್, ಆಯ್ಕೆಯಲ್ಲಿ ಸಾಕಷ್ಟು ಸ್ವಾತಂತ್ರ್ಯವಿರುವುದಾದರೂ, ನಂತರ ಅದು ಸ್ಥಿರವಾಗಿಯೂ ಸಾರ್ವತ್ರಿಕವೂ ಆಗಿರುತ್ತದೆ. 'ಮರ' ಎಂಬುದು ಧ್ವನಿಗಳ ಒಂದು ಸಂಯೋಜನೆಯಾಗಿದ್ದು, ಇದು ಒಂದು ನಿರ್ದಿಷ್ಟ ಪರಿಕಲ್ಪನೆಗೆಯೊಂದಿಗೆ ಜೋಡಣೆಗೊಂಡಿದೆ ಮತ್ತು ಈ ಸಂಬಂಧವು ಸ್ಥಿರವಾಗಿದೆ. ಅಷ್ಟೇ ಅಲ್ಲದೆ, ಕೆಲವು ಸಮಯದ ನಂತರ ಇತರೆ ಕೆಲವು ಧ್ವನಿಗಳ ಸಂಯೋಜನೆಯು ಈ ಪರಿಕಲ್ಪನೆಯೊಂದಿಗೆ ಸಂಬಂಧವನ್ನು ಹೊಂದುತ್ತದೆ. ಉದಾಹರಣೆಗೆ, ನಾವಿಂದು 'ಮರ' ಎಂದು ಯಾವುದನ್ನು ಕರೆಯುತ್ತೇವೋ ಅದರಿಂದ 'ಕ್ರಿಕೆಟ್' ಪದವು ಸಂಬಂಧವನ್ನು ಹೊಂದುವುದಿಲ್ಲವಾದರೂ, ಮರದ ಈ ಪರಿಕಲ್ಪನೆಯು ಅದು ಯಾವುದಕ್ಕೆ ಉಲ್ಲೇಖಿತವಾಗಿದೆಯೋ ಅದರೊಂದಿಗೆ ಹೊಂದುವ ಸಂಬಂಧವು ಎಷ್ಟೊಂದು ಅನಿಯಂತ್ರಿತವಾಗಿರುತ್ತೆದೆಯೆಂದರೆ, 'ಕ್ರಿಕೆಟ್' ನ ಪರಿಕಲ್ಪನೆಗೆ ಕ್ರಿಕೆಟ್‌ಗೆ ಇರುವಷ್ಟೇ.

ಅರ್ಥಪೂರ್ಣ ಭಾಷೆಯನ್ನು ನಿರ್ಮಿಸಲು ಪದಗಳನ್ನು ನಿಯಮಗಳ ಚೌಕಟ್ಟಿನಲ್ಲಿ ಬಳಸಲಾಗುತ್ತದೆ. ಉದಾಹರಣೆಗೆ, ಸರಿಯಾದ ಅರ್ಥ ರಚನೆಗಾಗಿ ಪದ ವಿನ್ಯಾಸವು ಕೆಲವು ನಿಯಮಗಳನ್ನು ಅನುಸರಿಸುತ್ತವೆ. ಈ ನಿಯಮಗಳು ಅನಿಯಂತ್ರಿತವಾಗಿದ್ದರೂ ಸಹ ಅವುಗಳ ಸ್ವಭಾವವು ಸ್ಥಿರ ಮತ್ತು ಸಾರ್ವತ್ರಿಕವಾಗಿರುತ್ತದೆ. ಹೀಗಾಗಿ ಭಾಷೆಯು ಮೌಖಿಕ ಪ್ರತೀಕಗಳ ಒಂದು ನಿಯಮದ ಮೂಲಕ ಚಾಲಿತವಾಗುವ ಚೌಕಟ್ಟಾಗಿದ್ದು, ಅದರ ಮೂಲಕ ಮನುಷ್ಯರು ಅರ್ಥ ನಿರ್ಮಾಣ ಮಾಡಿಕೊಳ್ಳುತ್ತಾರೆ. ಈ ಚೌಕಟ್ಟು ಬಹಳ ವ್ಯವಸ್ಥಿತವಾಗಿದೆ ಹಾಗೂ ಸಂಪೂರ್ಣವಾಗಿ ಮಾನವ ನಿರ್ಮಿತವಾಗಿದೆ. ಆದರೂ ಭಾಷೆಯಲ್ಲಿ ಧ್ವನಿಗಳ ಸಂಯೋಜನೆಗಳ ಸಂಖ್ಯೆಯು (ಯಾವುದಾದರೂ) ಸೀಮಿತವಾಗಿವೆ. ಆದರೆ ಭಾಷೆಯ ಚೌಕಟ್ಟು ಅರ್ಥ ರಚನೆಗೆ ಅಪರಿಮಿತವಾದ ಸಾಮರ್ಥ್ಯವನ್ನು ಹೊಂದಿರುತ್ತದೆ.

ಭಾಷೆಯನ್ನು ಕಲಿಯುವುದು ಎಂದರೆ ಈ ಚೌಕಟ್ಟನ್ನು ಕರಗತ ಮಾಡಿಕೊಳ್ಳುವುದು ಮತ್ತು ಅರ್ಥವನ್ನು ನಿರ್ಮಿಸಿಕೊಳ್ಳಲು, ಅರ್ಥವನ್ನು ಅರ್ಜಿಸಿಕೊಳ್ಳಲು ಹಾಗೂ ಅಭಿವ್ಯಕ್ತಿಗೊಳಿಸಲು ಈ ಚೌಕಟ್ಟಿನ ಬಳಕೆ ಮಾಡುವುದು. ಮೌಖಿಕ ಭಾಷೆಯು ಧ್ವನಿ ಸಂಕೇತಗಳಿಂದ ರೂಪುಗೊಂಡಿರುತ್ತದೆ ಹಾಗೂ ಲಿಖಿತ ಭಾಷೆಯು ದೃಶ್ಯಗಳ ಪ್ರತೀಕಗಳು ಅಥವಾ ಮೇಲ್ಮೈಯಲ್ಲಿ ಚಿಹ್ನೆಗಳಿಂದ (Marking) ರೂಪುಗೊಂಡಿರುತ್ತದೆ. ಈ ಚಿಹ್ನೆಗಳೇ ಅಕ್ಷರಗಳಾಗಿವೆ (Letter). ವರ್ಣಮಾಲೆಯ ಅಕ್ಷರಗಳು (ಮತ್ತು ಅವುಗಳ ಸಂಯೋಜನೆ) ಧ್ವನಿಗಳನ್ನು ಸೂಚಿಸುತ್ತವೆ. ಈ 'ಚಿಹ್ನೆ'ಗಳಿಗೆ ಈ ಧ್ವನಿಗಳೊಂದಿಗೆ ಸಂಬಂಧವೂ ಕೂಡ ಅನಿಯಂತ್ರಿತವಾಗಿರುತ್ತದೆ. ಆದರೆ ಇವು ಕೂಡ ಸ್ಥಿರ ಮತ್ತು ಸಾರ್ವತ್ರಿಕವಾಗಿರುತ್ತವೆ.

ನಾವು ಸದಾ (ಮಾನಸಿಕವಾಗಿ) ಲಿಖಿತ ಭಾಷೆಯನ್ನು ಮೌಖಿಕ ಭಾಷೆಗೆ 'ಅನುವಾದ' ಮಾಡುತ್ತಿರುತ್ತೇವೆ ಹಾಗೂ ಅದರ ಅರ್ಥವನ್ನು ಗ್ರಹಿಸಿಕೊಳ್ಳುತ್ತಿರುತ್ತೇವೆ. ಹೀಗಾಗಿ, ಮೌಖಿಕ ಭಾಷೆಗೆ ಹೋಲಿಸಿದರೆ ಲಿಖಿತ ಭಾಷೆಯ ಮೂಲಕ ಅರ್ಥವನ್ನು ತಲುಪಲು ಹೆಚ್ಚಿನ ಹಂತಗಳಿರುತ್ತವೆ.

ಮೌಖಿಕ ಭಾಷಾ ಸಂವಹನದ ಪರಸ್ಪರ ಕ್ರಿಯೆಯಲ್ಲಿ 'ಮೌಖಿಕವಲ್ಲದ ಸಂವಹನ'ಕ್ಕೆ (ಉದಾಹರಣೆಗೆ, ಮುಖಭಾವಗಳು, ಕೈಗಳ ಭಂಗಿಗಳು) ಅವಕಾಶಗಳು ಹಾಗೂ ಭಿನ್ನಹಗಳಿರುತ್ತವೆ. ಜೊತೆಗೆ ಇದರಲ್ಲಿ ತಕ್ಷಣದ ವಿವರಣೆಗೆ ಅವಕಾಶವೂ ಇರುತ್ತದೆ. ಆದರೆ ಲಿಖಿತ ಭಾಷೆಯಲ್ಲಿ ಇದೆಲ್ಲವೂ ಸಾಮಾನ್ಯವಾಗಿ ಸಾಧ್ಯವಿರುವುದಿಲ್ಲ. ಏಕೆಂದರೆ ಲಿಖಿತ ಭಾಷೆಯು ಕೆಲವು ಹೆಚ್ಚುವರಿ ಪ್ರತೀಕಗಳನ್ನು ಬಳಸುತ್ತದೆ ಹಾಗೂ ನಿಯಮಗಳ ಇನ್ನೊಂದು ಹೆಚ್ಚುವರಿಯಾದ ದೃಢವಾದ ಚೌಕಟ್ಟನ್ನು ಅನುಸರಿಸುತ್ತದೆ.

ಈ ಕಿರು ಲೇಖನದ ಉದ್ದೇಶವು ಭಾಷೆಯ ವೈಜ್ಞಾನಿಕ ವಿಶ್ಲೇಷಣೆಯಲ್ಲ, ಆದರೆ ಪ್ರಾಥಮಿಕ ಹಂತದಲ್ಲಿ ಬೋಧನೆ-ಕಲಿಕೆಗೆ ನೇರವಾಗಿ ಪರಿಣಾಮ ಬೀರಬಹುದಾದ ಸಮಸ್ಯೆಗಳ ಬಗೆಗೆ ಚರ್ಚಿಸುವುದು ಮಾತ್ರವಾಗಿದೆ. ಈ ಕಿರು ಲೇಖನದಲ್ಲಿ ನಾವು ತಲುಪಿರುವ ನಿರ್ಣಯಗಳಿವು:

೧. ಒಂದು ಮಗುವಿನ ಸಂದರ್ಭದಲ್ಲಿ ಗ್ರಹಿಕೆಯ ಬೆಳವಣಿಗೆ ಮತ್ತು ಭಾಷೆಯ ವಿಕಾಸವು ಒಂದು ಇನ್ನೊಂದರ ಮೇಲೆ ಸಂಪೂರ್ಣವಾಗಿ ಪರಸ್ಪರ ಅವಲಂಬಿತವಾಗಿದೆ.

೨. ಧ್ವನಿಗಳ (ಪದಗಳು) ಸಂಯೋಜನೆ ಮತ್ತು ಪರಿಕಲ್ಪನೆಗಳ ನಡುವಿನ ಸಂಬಂಧವು ಅನಿಯಂತ್ರಿತವಾಗಿದೆ ಹಾಗೂ ಇದಕ್ಕೆ ಯಾವುದೇ ತಾರ್ಕಿಕ ಆಧಾರವಿಲ್ಲ, ಆದರೆ ಈ ಸಂಬಂಧವು ಸ್ಥಾಯಿಯಾಗಿದೆ ಮತ್ತು ಸಾರ್ವತ್ರಿಕವಾಗಿದೆ.

೩. ವಾಕ್ಯ ರಚನೆ ಮತ್ತು ಅರ್ಥ ನಿರ್ಮಾಣಕ್ಕೆ ಬಳಸಲಾಗುವ ನಿಯಮಗಳ ಚೌಕಟ್ಟು ಕೂಡ ಅನಿಯಂತ್ರಿತವಾಗಿದೆ, ಆದರೆ ಇದು ಕೂಡ ಸ್ಥಾಯಿ ಮತ್ತು ಸಾರ್ವತ್ರಿಕವಾಗಿದೆ.

೪. ಆದ್ದರಿಂದ ಭಾಷೆಯು ಪ್ರತೀಕಗಳ ಒಂದು ಸುವ್ಯವಸ್ಥಿತ ಚೌಕಟ್ಟಾಗಿದೆ.

೫. ಈ ಭಾಷಾ ಚೌಕಟ್ಟಿನ ಅರ್ಥ ನಿರ್ಮಿಸುವ ಸಾಮರ್ಥ್ಯವು ಅಪರಿಮಿತವಾಗಿದೆ.

೬. ಲಿಖಿತ ಭಾಷೆಯಲ್ಲಿರುವ ಪದಗಳು ಧ್ವನಿಗಳ ಸಂಯೋಜನೆಯೊಂದಿಗೆ ಸಂಬಂಧವನ್ನು ಹೊಂದಿದೆ ಮತ್ತು ಅವುಗಳನ್ನು ಸೂಚಿಸುತ್ತವೆ ಕೂಡ. ಈ ಸಂಬಂಧವು ಕೂಡ ಅನಿಯಂತ್ರಿತವಾಗಿದೆ ಮತ್ತು ಅದೇ ವೇಳೆ ಸ್ಥಿರ ಮತ್ತು ಸಾರ್ವತ್ರಿಕವೂ ಆಗಿದೆ.

೭. ಮೌಖಿಕ ಭಾಷೆಯಲ್ಲಿ ಅರ್ಥದವರೆಗೆ ತಲುಪುವುದಕ್ಕೆ ಹೋಲಿಸಿದರೆ ಲಿಖಿತ ಭಾಷೆಯಲ್ಲಿ ಅರ್ಥದವರೆಗೆ ತಲುಪಲು ಹೆಚ್ಚುವರಿ ಹಂತವಿರುತ್ತದೆ.

ಪ್ರಾಥಮಿಕ ಹಂತದಲ್ಲಿ ಬೋಧನೆ-ಕಲಿಕೆಗೆ ಈ ನಿರ್ಣಯಗಳ ಹಲವು ಧ್ವನಿತಾರ್ಥಗಳಿವೆ, ಅವುಗಳಲ್ಲಿ ಎರಡರ ಬಗ್ಗೆ ನಾವು ಸ್ವಲ್ಪ ಚರ್ಚಿಸೋಣ. ಯಾವುದು ಅನಿಯಂತ್ರಿತವಾಗಿದೆಯೋ ಅದನ್ನು ಮಗುವು ಏಕಾಂಗಿಯಾಗಿ ತಿಳಿಯಲು ಸಾಧ್ಯವಿಲ್ಲ. ಇದಕ್ಕಾಗಿ ಭಾಷೆಯ ಈ ಅನಿಯಂತ್ರಿತ ಸಂಬಂಧವನ್ನು ಅರ್ಥಮಾಡಿಕೊಂಡಿರುವಂಥ ಇತರೆ ಭಾಷಾ ಬಳಕೆದಾರರ ನೆರವು ಪಡೆಯುವುದು ಅತ್ಯವಶ್ಯಕವಾಗಿದೆ. ಅದೇ ವೇಳೆ, ಇದು ಅಭ್ಯಾಸವನ್ನು ಸಹ ಬಯಸುತ್ತದೆ ಮತ್ತು ಆದ್ದರಿಂದ ಪರಿಕಲ್ಪನಾತ್ಮಕ ಜ್ಞಾನಕ್ಕೆ ಹೋಲಿಸಿದರೆ ನಿರಂತರ ಅಭ್ಯಾಸವು ಹೆಚ್ಚು ಪ್ರಮುಖವಾಗಿದೆ.

ಆದರೆ ನಿಯಮ ಚಾಲಿತ ಚೌಕಟ್ಟಿನಲ್ಲಿ ಪರಿಕಲ್ಪನಾತ್ಮಕವಾಗಿ ಜೋಡಿಸಿಕೊಂಡಾಗ ಮಾತ್ರ ಮಗುವು ಪಾಂಡಿತ್ಯವನ್ನು ಸಾಧಿಸಬಹುದಾಗಿದೆ ಹಾಗೂ ಇಲ್ಲಿ ಪರಿಕಲ್ಪನಾ ಜ್ಞಾನವು ಮುಖ್ಯವಾಗಿದೆಯೇ ಹೊರತು ಕೇವಲ ಅದರ ಅಭ್ಯಾಸವಲ್ಲ. ಭಾಷೆಯ ಕಲಿಕೆಯಲ್ಲಿ ಇವೆರಡೂ ಅವಶ್ಯಕವಾದರೂ, ಒಟ್ಟಾರೆ ಪರಿಕಲ್ಪನಾ ಜ್ಞಾನ ಮತ್ತು ಅರ್ಥ ನಿರ್ಮಾಣದ ಪ್ರಕ್ರಿಯೆಯು ಮಹತ್ವಪೂರ್ಣವಾಗುತ್ತದೆ. ಅಷ್ಟಾದರೂ, ಕೆಲವು ಪ್ರಕ್ರಿಯೆಗಳ ಸಂದರ್ಭದಲ್ಲಿ, ಉದಾಹರಣೆಗೆ, ಲೇಖನ ವ್ಯವಸ್ಥೆಯನ್ನು ಸದುಪಯೋಗಪಡಿಸಿಕೊಳ್ಳಲು, ನಿರಂತರವಾದ ಅಭ್ಯಾಸದ ಅವಶ್ಯಕತೆಯನ್ನು ನಾವು ಕೀಳಂದಾಜು ಮಾಡಲು ಸಾಧ್ಯವಿಲ್ಲ.

ಈ ಕಿರು ಲೇಖನವು ಕೆಲವು ಅಸಂಗತ ವಾದವನ್ನೂ ಕೂಡ ಒಳಗೊಂಡಿದೆ ಮತ್ತು ಅದಕ್ಕೆ ಕೆಲವು ಸ್ಪಷ್ಟೀಕರಣದ ಅಗತ್ಯವೂ ಇದೆ. ಪದಗಳೆಂಬುದು ಅನಿಯಂತ್ರಿತ ಕ್ರಮದಲ್ಲಿ ಜೋಡಿಸಲಾದ ಧ್ವನಿಗಳ ಸಂಯೋಜನೆ ಎಂಬ ವಾದವನ್ನು ಇಲ್ಲಿ ಮಾಡಲಾಗಿದೆ. ಪದಗಳನ್ನು ರೂಪಿಸಲು ಧ್ವನಿಗಳ ಸಂಯೋಜನೆ ಮಾಡಲು ಸಾರ್ವತ್ರಿಕವಾದ ನಿರ್ದಿಷ್ಟ ನಿಯಮಗಳಿವೆ ಎಂಬ ಅಂಶವನ್ನು ಎತ್ತಿಹಿಡಿಯಲು ಭಾಷಾಶಾಸ್ತ್ರದಲ್ಲಿ ಅಂಥ ಸಾಕಷ್ಟು ಸಂಶೋಧನೆಗಳಿವೆ. ಆದರೆ ಈ ನಿಯಮಗಳನ್ನು ಅನುಸರಿಸಿದ ನಂತರವೂ, ಹೆಚ್ಚಿನ ಪದಗಳು ಧ್ವನಿಗಳನ್ನು ಸಂಯೋಜಿಸಲು ಹಾಗೂ ಪರಿಕಲ್ಪನೆಗಳನ್ನು ಅವುಗಳೊಂದಿಗೆ ಜೋಡಿಸಲು ಅನಿಯಂತ್ರಿತತೆಯ ಗುಣಗಳನ್ನು ಪರಿಗಣಿಸುತ್ತವೆ.

ಎರಡನೆಯ ವಾದವೆಂದರೆ ಪದವೆಂಬುದು ಭಾಷೆಯ ಅತ್ಯಂತ ಸಣ್ಣದಾದ ಅರ್ಥಪೂರ್ಣ ಘಟಕವಾಗಿದೆ. ಆದರೆ ವಾಕ್ಯವೆಂಬುದು ಭಾಷೆಯ ಅತ್ಯಂತ ಸಣ್ಣದಾದ ಅರ್ಥಪೂರ್ಣ ಘಟಕವಾಗಿದೆ ಎಂಬ ಪ್ರಬಲ ಅಭಿಪ್ರಾಯವೂ ಇದೆ. ಜ್ಞಾನದ ಕೋರಿಕೆ, ವಿನಂತಿ ಮತ್ತು ಅನುಮಾನಗಳನ್ನು ವ್ಯಕ್ತಪಡಿಸಲು ವಾಕ್ಯವು ಅತ್ಯಂತ ಸಣ್ಣದಾದ ಘಟಕವಾಗಿದೆ ಎಂಬುದು ನಿಜವಾಗಿದ್ದರೂ; ಮನಸ್ಸಿನಲ್ಲಿ ಒಂದು ವಿಚಾರವು ಹೊಳೆಯಲು ಒಂದು ಪದವೇ ಸಾಕಾಗುತ್ತದೆ. ಹಾಗೂ ವಿಚಾರದ ಹೊಳೆಯುವಿಕೆಯನ್ನು ಅರ್ಥದ ಹೊಳೆಯುವಿಕೆ ಎಂದೇ ಪರಿಗಣಿಸಬೇಕಾಗುತ್ತದೆ.

ಮೂರನೆಯ ವಾದವೆಂದರೆ, ವಾಕ್ಯದಲ್ಲಿನ ಪದಗಳ ಕ್ರಮವ್ಯವಸ್ಥೆಯು ಅನಿಯಂತ್ರವಾಗಿರುತ್ತದೆ. ಮಾನವನ ಎಲ್ಲಾ ಭಾಷೆಗಳು ಕೂಡ ಕೆಲವೊಂದು ಸಾರ್ವತ್ರಿಕ ಮಾದರಿಯನ್ನು ಹೊಂದಿವೆ ಮತ್ತು ಈ ಮಾದರಿಗಳೇ ವಾಕ್ಯದಲ್ಲಿನ ಪದಗಳ ಕ್ರಮವ್ಯವಸ್ಥೆಯನ್ನು ನಿರ್ಧರಿಸುತ್ತವೆ ಎಂದು ಭಾಷೆಯ ವೈಜ್ಞಾನಿಕ ಸಂಶೋಧನೆಯು ಸಿದ್ಧಪಡಿಸಿದೆ. ಒಂದು ವಾಕ್ಯದಲ್ಲಿನ ಪದಗಳ ಕ್ರಮವ್ಯವಸ್ಥೆಗೆ ಸಂಬಂಧಿಸಿದಂತೆ ಮಕ್ಕಳು ಎಂದಿಗೂ ತಪ್ಪುಗಳನ್ನು ಮಾಡುವುದಿಲ್ಲ ಮತ್ತು ಈ ನಿಯಮಗಳು ಮಾನವರ ಮೆದುಳಿನಲ್ಲಿ ಜನ್ಮಜಾತವಾಗಿ ಪರಿಗಣಿತವಾಗಿರುತ್ತವೆ ಎಂಬ ವಾದವೂ ಕೂಡ ಇದೆ. ಆದರೆ ವಾಕ್ಯದ ಒಂದಕ್ಕಿಂತ ಹೆಚ್ಚು ರಚನೆಗಳು ಸಾಧ್ಯವಾಗುವುದರಿಂದ ಮತ್ತು ಮಕ್ಕಳು ಅದರಲ್ಲಿ ತಪ್ಪುಗಳನ್ನು ಕೂಡ ಮಾಡುತ್ತಾರೆ. ಹೀಗಾಗಿ ಅವುಗಳನ್ನು ಕಲಿಯುವಲ್ಲಿ ಅನುಭವದ ಪಾತ್ರವೂ ದೊಡ್ಡದಾಗಿರುತ್ತದೆ. ಸಾರ್ವತ್ರಿಕ ಮಾದರಿಗಳಿರುವುದು ನಿಜವಾದರೂ ಅವು ಭಾಷೆಯ ಕೆಲವು ನಿಯಮಗಳಂತೆ ಜನ್ಮಜಾತವಾಗಿರುತ್ತವೆಯೇ ಅಥವಾ ಅವು ಮಾನವನ ಅರಿವಿನ ರಚನೆಯ (Human Cognitive Architecture) ಅಭಿವ್ಯಕ್ತಿಯಾಗಿರುತ್ತದೆಯೇ ಎಂಬುದರ ಬಗ್ಗೆ ವಿವಾದಗಳಿವೆ. ಹೀಗಾಗಿ ಇಲ್ಲಿ ಅನಿಯಂತ್ರಿತತೆಯು ಸ್ವಲ್ಪ ಸೀಮಿತವೇ ಆಗಿರುತ್ತದೆ.

ಕೆಲವು ಜಾಗಗಳಲ್ಲಿ ಧ್ವನಿಗಳ ಮಾದರಿ ಮತ್ತು ಅರ್ಥಗಳ ಸಂಯೋಜನೆಯನ್ನು ಒಂದು ಭಾಷಾ ಸಮುದಾಯಕ್ಕೆ 'ಸಾರ್ವತ್ರಿಕ ಮತ್ತು ಸ್ಥಿರ'ವಾಗಿರುತ್ತದೆ ಎಂದು ಹೇಳಲಾಗಿದೆ. ಇದು ಒಂದು ನಿರ್ದಿಷ್ಟ ಸ್ಥಳ ಮತ್ತು ಸಮಯಕ್ಕಷ್ಟೇ ಸರಿಯಾಗಿರುತ್ತದೆ. ಕಾಲ ಮತ್ತು ಬೇರೆ ಬೇರೆ ಭಾಷಾ ಸಮುದಾಯಗಳೊಂದಿಗೆ ಭಾಷೆಯು ತನ್ನ ಶೈಲಿ ಮತ್ತು ಪದಗಳಿಗೆ ಸಂಬಂಧಿಸಿದ ಅರ್ಥದಲ್ಲೂ ಕೂಡ ಬದಲಾವಣೆಯಾಗುತ್ತಿರುತ್ತದೆ. ಆದರೆ ಎಲ್ಲಿಯವರೆಗೆ ಯಾವುದೇ ಒಂದು ಭಾಷೆಯನ್ನು ಜನರು 'ಸಾಮಾನ್ಯವಾಗಿ ಗ್ರಹಿಸುತ್ತಾರೋ, ಅಲ್ಲಿಯವರೆಗೆ ಅದು 'ಸಾಮಾನ್ಯವಾಗಿ ಸ್ವೀಕೃತವಾಗುವ ಹಾಗೂ ಶಾಶ್ವತವಾಗಿರುವ' ಗುಣವನ್ನು ಹೊಂದಿರುತ್ತದೆ.

ಕೊನೆಯದಾಗಿ, ಮನುಷ್ಯನಾಗುವಲ್ಲಿ ಭಾಷೆಯ ಪಾತ್ರವು ಪ್ರಧಾನವಾಗಿದೆ. ಈ ಅಂಶವನ್ನು ಇಲ್ಲಿ ವಿವರವಾಗಿ ಚರ್ಚಿಸಲಾಗಿಲ್ಲ. ಏಕೆಂದರೆ, ತರಗತಿಯಲ್ಲಿ ಭಾಷಾ ಬೋಧನೆಯಲ್ಲಿ ತಕ್ಷಣವೇ ಬಳಸಬಹುದಾದ ಅಂಶಗಳನ್ನು ವಿವರಿಸುವ ಬಗ್ಗೆ ಇಲ್ಲಿ ಗಮನಹರಿಸಲಾಗಿದೆ.

ಮೂಲ

• ರೋಹಿತ್ ಧನಕರ್, 2009, "ಇಂಪಾರ್ಟೆನ್ಸ್ ಆಫ್ ಲ್ಯಾಂಗ್ವೇಜ್', 'ಲರ್ನಿಂಗ್ ಕರ್ವ್' xiii, ಅಜೀಂ ಪ್ರೇಮ್‌ಜಿ ಫೌಂಡೇಶನ್, ಬೆಂಗಳೂರು